## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 106
2. ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀಧರರ ಕ್ಷೇತ್ರದಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 13-12-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ಆವರಣದಲ್ಲಿ ಕಳೆದ 2017ರ ಸೆಪ್ಟೆಂಬರ್‌ನಲ್ಲಿ ನಾಡಪ್ರಭು ಕೆಂಪೇಗೌಡ ಅಧ್ಯಯನ ಕೇಂದ್ರ ನಿರ್ಮಾಣಕ್ಕಾಗಿ ನಡೆದ ಭೂಮಿ ಪೂಜೆಯ ನಂತರ ಅಧ್ಯಯನ ಕೇಂದ್ರದ ಕೆಲಸ ಪ್ರಾರಂಭವಾಗಿದೆಯೇ; ಕಟ್ಟಡದ ಕೆಲಸ ಯಾವ ಹಂತದಲ್ಲಿದೆ; | ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ಆವರಣದಲ್ಲಿ "ನಾಡಪ್ರಭು ಕೆಂಪೇಗೌಡ ಅಧ್ಯಯನ ಕೇಂದ್ರ" ನಿರ್ಮಾಣವನ್ನು ರೂ.50.00 ಕೋಟಿ ವೆಚ್ಚದಲ್ಲಿ ಕೈಗೊಳ್ಳಲು ಬಿಬಿಎಂಪಿಯ ಆಯವ್ಯಯದಲ್ಲಿ ಮೀಸಲಿರಿಸುವ ಷರತ್ತಿಗೊಳ್ಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ. ಅದರಂತೆ, ಕಳೆದ 2017ರ ಸೆಪ್ಟೆಂಬರ್ ನಲ್ಲಿ "ನಾಡಪ್ರಭು ಕೆಂಪೇಗೌಡ ಅಧ್ಯಯನ ಕೇಂದ್ರ" ನಿರ್ಮಾಣಕ್ಕಾಗಿ ಭೂಮಿ ಪೂಜೆ ಮಾಡಲಾಗಿದೆ.<br><br>ತದನಂತರ, ಸದರಿ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಆಹ್ವಾನಿಸಲಾಗಿದ್ದು, ದಿನಾಂಕ: 24-06-2021 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಿರ್ಣಯದಂತೆ ಗುತ್ತಿಗೆದಾರರಾದ M. Rajendra (M.R. Constructions) ರವರ ಸಂಧಾನಿತ ಬಿಡ್ಡನ್ನು ಟೆಂಡರ್‌ಗಿಟ್ಟ ಮೊತ್ತವಾದ ರೂ.38,70,24,316.00 ಗಳಿಗೆ ಹೋಲಿಸಿದಾಗ 5.00% ಅಧಿಕ ಅಂದರೆ ರೂ.40,63,75,531.80 (ಅನ್ವಯವಾಗುವ ಎಲ್ಲಾ ತೆರಿಗೆಗಳೂ ಸೇರಿದಂತೆ) ಗಳಿಗೆ ಮಿತಿಗೊಳಿಸಿ ಕೆಲವು ಷರತ್ತುಗೊಳಪಟ್ಟು ಸರ್ಕಾರದ ಆದೇಶ ಸಂಖ್ಯೆ: ನಅಇ 47 ಎಂಎನ್ ವೈ 2021, ದಿನಾಂಕ: 29-06-2021 ರನ್ವಯ ಸದರಿ ಟೆಂಡರ್ ಗೆ ಅನುಮೋದನೆಯನ್ನು ನೀಡಲಾಗಿತ್ತು.<br><br>ಆದರೆ, ಗುತ್ತಿಗೆದಾರರಾದ M. Rajendra (M.R. Constructions) ರವರು ಸದರಿ ಮೊತ್ತಕ್ಕೆ ಒಪ್ಪದ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ನಅಇ 47 ಎಂಎನ್ ವೈ 2021 (ಭಾ-1), ದಿನಾಂಕ: 22-10-2021 ರನ್ವಯ ದಿನಾಂಕ: 29-06-2021ರ ಆದೇಶವನ್ನು ರದ್ದುಪಡಿಸಲಾಗಿದ್ದು, "Construction of Kempegowda Study Center at Bangalore University in ward No.129" ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಕೂಡಲೇ ಮರು ಟೆಂಡರ್ ಕರೆಯುವಂತೆ ಮುಖ್ಯ ಆಯುಕ್ತರು, ಬಿಬಿಎಂಪಿ ರವರಿಗೆ ಆದೇಶಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ ಸದರಿ ಕಾಮಗಾರಿಗೆ ಮರು ಟೆಂಡರ್ ಕರೆಯುವ ಕಾರ್ಯ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| ಆ | ಅಧ್ಯಯನ ಕೇಂದ್ರ ನಿರ್ಮಾಣಕ್ಕೆ ಎಷ್ಟು ಹಣ ಬಿಡುಗಡೆಯಾಗಿದೆ; ಬಾಕಿ ಎಷ್ಟು ಹಣ ಬಿಡುಗಡೆ ಆಗಬೇಕಿದೆ; | ಅಧ್ಯಯನ ಕೇಂದ್ರ ನಿರ್ಮಾಣಕ್ಕೆ 2021-22ನೇ ಸಾಲಿನಲ್ಲಿ ರೂ.500.00 ಲಕ್ಷಗಳ ಅನುದಾನವನ್ನು ಮೀಸಲಿರಿಸಲಾಗಿದ್ದು, ಯಾವುದೇ ಹಣ ಬಿಡುಗಡೆಯಾಗಿರುವುದಿಲ್ಲ. |
| ಇ | ಕೆಲಸ ಪ್ರಾರಂಭಿಸದಿದ್ದಲ್ಲಿ ಸರ್ಕಾರಕ್ಕೆ ಇರುವ ತೊಂದರೆಗಳೇನು: | ಸರ್ಕಾರದ ಅನುಮೋದನೆಯಂತೆ ಎಲ್-1 ಗುತ್ತಿಗೆದಾರರು ಕಾಮಗಾರಿಯನ್ನು ನಿರ್ವಹಿಸಲು ಒಪ್ಪದ ಹಿನ್ನೆಲೆಯಲ್ಲಿ, ಸದರಿ ಕಾಮಗಾರಿಗೆ ಮರು ಟೆಂಡರ್ ಕರೆಯಲು ಕ್ರಮಕೈಗೊಳ್ಳಲಾಗುತ್ತಿದೆ. ಚುನಾವಣಾ ನೀತಿ ಸಂಹಿತೆ ಅವಧಿ ಮುಗಿದ ನಂತರ ಮರು ಟೆಂಡರ್ ಆಹ್ವಾನಿಸಲಾಗುತ್ತದೆ. |
| ಈ | ಕಳೆದ ನಾಲ್ಕು ವರ್ಷಗಳಿಂದ ಯಾವ ಕಾರಣಕ್ಕಾಗಿ ಅಧ್ಯಯನ ಕೇಂದ್ರ ನಿರ್ಮಾಣದ ಕೆಲಸ ಪ್ರಾರಂಭವಾಗಿಲ್ಲ? (ಮಾಹಿತಿ ನೀಡುವುದು) | "ನಾಡಪ್ರಭು ಕೆಂಪೇಗೌಡ ಅಧ್ಯಯನ ಕೇಂದ್ರ"ಕ್ಕೆ ನಿರ್ದಿಷ್ಟವಾದ ನಿವೇಶನ ಗುರುತಿಸಿಕೊಡುವಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ದಿಂದ ವಿಳಂಭವಾಗಿದ್ದರಿಂದ ಮತ್ತು ಈಗಾಗಲೇ ಟೆಂಡರ್ ಕರೆದು, ಸರ್ಕಾರವು ಮಂಜೂರಾತಿ ನೀಡಿರುವ ದರಕ್ಕೆ ಗುತ್ತಿಗೆದಾರರು ಒಪ್ಪದಿದ್ದ ಹಿನ್ನೆಲೆಯಲ್ಲಿ, ಸರ್ಕಾರವು ಸದರಿ ಟೆಂಡರ್‌ನ್ನು ರದ್ದುಗೊಳಿಸಿ, ಪ್ರಸ್ತಾಪಿತ ಕಾಮಗಾರಿಗೆ ಮರು ಟೆಂಡರ್ ಕರೆಯಲು ಆದೇಶಿಸಿರುತ್ತದೆ. ಈ ಹಿನ್ನೆಲೆಯಲ್ಲಿ, ಬಿಬಿಎಂಪಿ ವತಿಯಿಂದ ಮರು ಟೆಂಡರ್ ಕರೆಯಲು ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ: ನಅಇ 354 ಎಂಎನ್ ವೈ 2021

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ